# ಸರ್ವಶಿಕ್ಷಣ ಅಭಿಯಾನದ ತರಬೇತಿ ಕಾರ್ಯಕ್ರಮದ ಒಳನೋಟಗಳು

ಶೆಹನಾಜ್ ಜ಼ಕೀರ್

ನಿರಂತರ ಮತ್ತು ಸಮಗ್ರ ಮೌಲ್ಯಮಾಪನದಂತಹ (Continuous and Comprehensive Evaluation, CCE) ಶಿಕ್ಷಣಕ್ಕೆ ಸಂಬಂಧಿಸಿದ ಕೆಲವು ವಿಷಯಗಳ ಬಗೆಗೆ ತಿಳುವಳಿಕೆ ನೀಡಲು ಮತ್ತು ಪರೀಕ್ಷೆಗಳ ಫಲಿತಾಂಶದಲ್ಲಿ ಸುಧಾರಣೆಯನ್ನು ಹಾಗೂ ತರಗತಿಯಲ್ಲಿ ಪರಿಣಾಮಕಾರಿ ಬೋಧನೆಮಾಡಲು ಸರಕಾರಿ ಶಾಲೆಗಳ ಎಲ್ಲ ಶಿಕ್ಷಕರಿಗೂ ಸರ್ವಶಿಕ್ಷಣ ಅಭಿಯಾನದಿಂದ 6 ದಿನಗಳ ತರಬೇತಿಯನ್ನು ನೀಡಲಾಗುತ್ತದೆ. ಒಂದು ಅನುದಾನಿತ ಶೈಕ್ಷಣಿಕ ಸಂಸ್ಥೆಯಲ್ಲಿ ಸರಕಾರಿ ಉದ್ಯೋಗವನ್ನು ಪಡೆದ ನಂತರ ನಾನೂ, ಸರ್ವಶಿಕ್ಷಣ ಅಭಿಯಾನದಿಂದ ನಡೆಯಲ್ಪಡುವ ಕಾರ್ಯಕ್ರಮವೊಂದರಲ್ಲಿ ಪಾಲ್ಗೊಂಡಿದ್ದೆ. ನಾನು ಈ ಹಿಂದೆ 14 ವರ್ಷಗಳ ನನ್ನ ಸೇವಾವಧಿಯಲ್ಲಿ ವಿದ್ಯಾಭವನದ ಹಲವು ತರಬೇತಿ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದೆನಾದರೂ ಸರ್ವಶಿಕ್ಷಣ ಅಭಿಯಾನದ ಈ ಕಾರ್ಯಕ್ರಮದಲ್ಲಿ ಇದೇ ಮೊದಲನೇ ಸಲ ಪಾಲ್ಗೊಂಡೆ. ಹಿಂದೆ ಭಾಗವಹಿಸಿದ ಕಾರ್ಯಕ್ರಮಗಳಿಂದ ಪಡೆದ ಗ್ರಹಿಕೆಗಳೊಂದಿಗೆ ನಾನು SSA ಕಾರ್ಯಕ್ರಮಕ್ಕೆ ಉತ್ಸಾಹದಿಂದ ಬಂದೆ.

ಅದು ಆರು ದಿನಗಳ ತರಬೇತಿ ಕಾರ್ಯಕ್ರಮವಾಗಿತ್ತು. ನಾವು ಗಣಿತ ಮತ್ತು ಇಂಗ್ಲಿಷ್– ಈ ಎರಡು ವಿಷಯಗಳಲ್ಲಿ ತರಬೇತಿ ಪಡೆಯುವವರಿದ್ದೆವು. ಪ್ರತೀ ವಿಷಯಕ್ಕೂ ಮೂರು ದಿನಗಳನ್ನು ಮೀಸಲಾಗಿಡಲಾಗಿತ್ತು. ಮೊದಲನೆಯ ದಿನ ತರಬೇತಿಯ ಸ್ಥಳವನ್ನು ತಲುಪಿ, ನಮ್ಮ ನೋಂದಣಿ ಮತ್ತು ಇತರ ಔಪಚಾರಿಕ ಕೆಲಸಗಳಲ್ಲಿಯೇ ಅರ್ಧ ದಿನ ಕಳೆಯಿತು. ನಂತರ ಗಣಿತದ ಮೇಲಿನ ಚರ್ಚೆ ಆರಂಭವಾಯಿತು, ಶಿಕ್ಷಕ ಪ್ರಶಿಕ್ಷಕರು (ತಜ್ಞ ತರಬೇತಿದಾರರು (MT: Maser trainer) ನಮ್ಮ ಸಮಸ್ಯೆಗಳನ್ನು ಹಂಚಿಕೊಳ್ಳಲು ಹೇಳಿದರು. ಶಿಕ್ಷಕರು ಭಿನ್ನರಾಶಿಯಿಂದ ಹಿಡಿದು ಹೇಳಿಕೆ/ವಾಕ್ಯರೂಪದ ಸಂಖ್ಯಾ ಸಮಸ್ಯೆಗಳು ಮತ್ತು ಸಂಖ್ಯೆಗಳನ್ನು ಬರೆಯುವುದರ ವರೆಗೆ ಸಮಸ್ಯೆಗಳನ್ನು ಹಂಚಿಕೊಂಡರು. ಯಾರಿಗೂ ಈ ಸಮಸ್ಯೆಗಳನ್ನು ಹೇಗೆ ಪರಿಹರಿಸುವುದು ಎಂಬುದು ಗೊತ್ತಿರಲಿಲ್ಲ. ಪ್ರತೀ ವರ್ಷವೂ ಅಂತಹ ಸಮಸ್ಯೆಗಳನ್ನು ಮುಂದಿಡಲಾಗುತ್ತದೆ, ಆದರೆ ಬಗೆಹರಿಯುವುದಿಲ್ಲ. ಶಿಕ್ಷಕರಿಗೆ ಈ ಪರಿಕಲ್ಪನೆಗಳನ್ನು ಮಕ್ಕಳಿಗೆ ಹೇಗೆ ಕಲಿಸುವುದು ಎನ್ನುವುದನ್ನು ಅರ್ಥಮಾಡಿಕೊಳ್ಳಲು ಆಗುತ್ತಿಲ್ಲ. ತರಬೇತಿದಾರರು ತಮ್ಮ ಸಮಸ್ಯೆಗಳಿಗೆ ಪರಿಹಾರ ಕೊಡಲಿ ಎಂದು ಎಲ್ಲ ಶಿಕ್ಷಕರೂ ಬಯಸಿದ್ದರು. ಆದರೆ ತರಬೇತಿದಾರನಿಗೆ ಈ ಕುರಿತು ಹೆಚ್ಚಿನ ಅನುಭವವಿರಲಿಲ್ಲ, ಮತ್ತು 1 ರಿಂದ 5ನೇ ತರಗತಿಯವರೆಗಿನ ಪಠ್ಯಪುಸ್ತಕಗಳನ್ನೂ ಓದಿರಲಿಲ್ಲ. ಹೀಗಾಗಿ ಆತನಿಗೆ ಈ ವಿಷಯವನ್ನು ಕುರಿತ ಚರ್ಚೆಯನ್ನು ಮುಂದುವರೆಸಲು ಸಾಧ್ಯವಾಗಲಿಲ್ಲ. ಅವರು ಶಿಕ್ಷಕರನ್ನೇ ತಿರುಗಿ ಕೇಳಿದರು, ಮಕ್ಕಳು ಲೆಕ್ಕಗಳನ್ನು ಸರಿಯಾಗಿ ಕಲಿಸಲು ಅವರು ಬಳಸಿದ ವಿಧಾನಗಳು ಮತ್ತು ಆ ಕುರಿತು ಅವರ ಅನುಭವವೇನು ಎಂದು ವಿಚಾರಿಸಿದರು. ಚೆಂಡು ಮರಳಿ ಶಿಕ್ಷಕರ ಅಂಗಳದಲ್ಲಿಯೇ ಬಿತ್ತು. ಮಕ್ಕಳು ಆ ಪರಿಕಲ್ಪನೆಗಳನ್ನು ಕಂಠಪಾಠ ಮಾಡುವಂತೆ ಮಾಡುವುದು, ಅವರೆಲ್ಲ ಹೇಗೋ ನೆನಪಿಟ್ಟುಕೊಳ್ಳುವಂತೆ ಮಾಡುವುದು ಮತ್ತು ಮುಂದಿನ ವರ್ಷ ಮರಳಿ ಅದನ್ನು ಕಲಿಸುವುದು ಇವನ್ನೇ ಹೆಚ್ಚಿನದಾಗಿ ಶಿಕ್ಷಕರು ಮಾಡುತ್ತಿದ್ದರು. ಒಟ್ಟಿನಲ್ಲಿ ಇಡೀ ಚರ್ಚೆಯು ನಿಷ್ಪ್ರಯೋಜಕವಾಗಿತ್ತು ಮತ್ತು ತರಬೇತಿದಾರರೂ (MT) ಸಹಾ ಚರ್ಚೆಯ ಇಡೀ ಪ್ರಕ್ರಿಯೆಗೆ ಹೆಚ್ಚಿನ ಕೊಡುಗೆ ನೀಡಲಿಲ್ಲ.

ಗಣಿತದ ಮುಂದಿನ ಎರಡು ದಿನಗಳಲ್ಲಿಯೂ ಹೇಳಿಕೊಳ್ಳುವಂತಹ ಕೆಲಸವೇನೂ ಆಗಲಿಲ್ಲ. ಗುಂಪಿನ ಚಟುವಟಿಕೆಗಳಲ್ಲಿ ಇಬ್ಬರು ಅಥವಾ ಮೂವರು ಶಿಕ್ಷಕರು ಸೇರಿ ತಮ್ಮ ಆಲೋಚನೆಗಳನ್ನು ಬರೆದು ಒಂದು ಚಾರ್ಟ್ ತಯಾರಿಸಿದರು. ಉಳಿದವರು ತಮ್ಮದೇ ಸ್ವಂತಕೆಲಸಗಳನ್ನು ಪೂರ್ಣಗೊಳಿಸುತ್ತ ಕೂತಿದ್ದರು. ಆ ಚರ್ಚುಗಳನ್ನೂ ಯಾವ ಪ್ರಸ್ತುತಿ ಇಲ್ಲದೆ (presentations) ಚರ್ಚೆ ಅಥವಾ ಪ್ರಶ್ನೋತ್ತರಗಳಿಲ್ಲದೆ ಸುಮ್ಮನೇ ಅಲ್ಲಿಡಲಾಯಿತು.

ನಿರಂತರ ಮತ್ತು ಸಮಗ್ರ ಮೌಲ್ಯಮಾಪನದ (Continuous and Comprehensive Evaluation, CCE) ದಿನಚರಿ ಪುಸ್ತಕವನ್ನು ತುಂಬುವ ಸಮಯ ಬಂದಾಗಲೂ ಅದೇ ರೀತಿ ಸಮಯ ಕಳೆಯಿತು. ತರಬೇತಿದಾರರಿಗೆ CCE ಡೈರಿಯನ್ನು ಕುರಿತೂ ಹೆಚ್ಚು ಗೊತ್ತಿದ್ದ ಹಾಗೆ ಕಾಣಲಿಲ್ಲ. ಎಲ್ಲಾ ವಿವರಗಳನ್ನೂ ಕಳೆದ ವರ್ಷದಿಂದ ತುಂಬುತ್ತ ಬಂದ ಶಿಕ್ಷಕರೇ ಒದಗಿಸಿದರು. ಅವರಿಗೂ ಎಲ್ಲಾ ಪ್ರಶ್ನೆಗಳಿಗೆ ಉತ್ತರಿಸಲಾಗಲಿಲ್ಲ. ಉದಾಹರಣೆಗೆ, ನೀವು ತರಗತಿಯಲ್ಲಿ ಮಾಡಿದ ವಿವಿಧ ಗುಂಪುಗಳಿಗೆ ಪಾಠ ಯೋಜನೆಗಳನ್ನು ಹೇಗೆ ಬರೆಯುತ್ತೀರಿ, ಬೇರೆ ಬೇರೆ ಹಂತಗಳಲ್ಲಿರುವ ವಿದ್ಯಾರ್ಥಿಗಳ ಮೌಲ್ಯಮಾಪನವನ್ನು ಹೇಗೆ ಮಾಡುತ್ತೀರಿ, ಅವರಿಗೆ ಬೇರೆ ಬೇರೆ ಪ್ರಶ್ನೆಪತ್ರಿಕೆಗಳನ್ನು ತಯಾರಿಸುತ್ತೀರೋ ಅಥವಾ ಎಲ್ಲಾ ಹಂತಗಳಿಗೂ ಒಂದೇ ಪ್ರಶ್ನೆ ಪತ್ರಿಕೆ ಇರುತ್ತದೆಯೋ ಎಂಬ ಪ್ರಶ್ನೆಗಳಿಗೆ ಅವರು ಉತ್ತರಿಸಲಾಗಲಿಲ್ಲ. ದಿನಚರಿ ಪುಸ್ತಕವನ್ನು ತುಂಬುವುದು ಶಿಕ್ಷಕರಿಗೆ ಗೊಂದಲವನ್ನುಂಟುಮಾಡಿತ್ತು. ತರಬೇತಿ ಕಾರ್ಯಕ್ರಮದಲ್ಲಿ ಏನನ್ನೂ ಕಲಿಯಲಾಗಲಿಲ್ಲ ಎಂದು ಅವರಿಗೂ ಅಸಮಾಧಾನವಾಗಿತ್ತು. ಗಣಿತ ಶಿಕ್ಷಕರು ಶಾಲೆಗಳಿಗೆ ಮರಳಿದ ಮೇಲೆ ಅವರ ಬೋಧನೆಯಲ್ಲಿ ಸುಧಾರಣೆ ತರುವಂತಹ ಏನೂ ಈ ತರಬೇತಿಯಿಂದ ಸಿಗಲಿಲ್ಲ.

ಮುಂದಿನ ಮೂರು ದಿನಗಳನ್ನು ಇಂಗ್ಲಿಷಿಗೆ ಮೀಸಲಾಗಿಡಲಾಗಿತ್ತು. ಈ ವಿಷಯವು ನನಗೂ ಹೊಸತಾಗಿತ್ತು. ನನ್ನ ಬಳಿಯೂ ಹಲವು ಪ್ರಶ್ನೆಗಳಿದ್ದವು ಮತ್ತು ಉತ್ತರಗಳ ನಿರೀಕ್ಷೆಯನ್ನೂ ಇಟ್ಟುಕೊಂಡಿದ್ದೆ. ಪ್ರಸ್ತಾವನೆಯ ಅವಧಿಯ ನಂತರ ತರಬೇತಿದಾರರು ಮಾತನಾಡಲು ಶುರು ಮಾಡಿದರು. ಇಂಗ್ಲಿಷಿನ ಸಮಸ್ಯೆಯು ನಾವು ತಿಳಿದದ್ದಕ್ಕಿಂತ ಹೆಚ್ಚು ಗಂಭೀರವಾಗಿತ್ತು ಎನ್ನುವುದು ನನಗೆ ತಿಳಿಯಿತು. ಮಕ್ಕಳಿಗೆ ಇಂಗ್ಲಿಷ್ ಕಲಿಸುವುದು ಬಹಳ ಕಷ್ಟ, ಏಕೆಂದರೆ ಅವರಿಗೆ ಇಂಗ್ಲಿಷಿನಲ್ಲಿ ಓದಲು ಮತ್ತು ಬರೆಯಲು ಬರವುದಿಲ್ಲ ಎಂದು ಹೆಚ್ಚಿನ ಶಿಕ್ಷಕರಿಗೆ ಅನಿಸಿತ್ತು. ಇದಕ್ಕೆ ಪರಿಹಾರವೇನು ಎಂದು ತರಬೇತಿದಾರರು ಶಿಕ್ಷಕರಿಗೆ ಕೇಳಿದರು. ಪದಗಳ ಕಾಗುಣಿತವನ್ನು ಕಲಿಸುವ ಅಗತ್ಯವಿದೆ ಎಂದು ಎಲ್ಲರೂ ಒತ್ತಿ ಹೇಳಿದ್ದರು. ಆದರೆ ಮಕ್ಕಳಿಗೆ ಕಾಗುಣಿತ ಕಲಿಸಿದರೆ ಅವರು ವೇಗವಾಗಿ ಓದಿ ಬರೆದು ಮಾತಾಡಬಲ್ಲರೇ ಎಂದು ನಾನು ಕೇಳಿದೆ. ಎಲ್ಲ

ಮೌನವಾದರು. ಕೆಲವು ಶಿಕ್ಷಕರು ತಲೆಯಲ್ಲಾಡಿಸಿದರು, ಕೆಲವರು ಮಕ್ಕಳು ಕಾಗುಣಿತ ಕಲಿಯದಿರುವುದೇ ಸಮಸ್ಯೆ ಎಂದರು.

ಮತ್ತೆ ತೆರಪಿಲ್ಲದಂತೆ ನನ್ನ ತಲೆಯಲ್ಲಿ ಪ್ರಶ್ನೆಗಳು ಎದ್ದಿದ್ದವು. ಮಕ್ಕಳಿಗೆ ಓದಿ-ಬರೆಯುವುದನ್ನು ಕಲಿಸುವ ಪೂರ್ವದಲ್ಲಿ ಮಾಡಬಹುದಾದ ಕೆಲವು ಚಟುವಟಿಕೆಗಳಿವೆ, ಅವು ಭಾಷಾ ಕಲಿಕೆಗೆ ಸಹಾಯ ಮಾಡುತ್ತವೆ ಎಂದು ನಾನು ತರಬೇತಿದಾರರಿಗೆ ಹೇಳಿದೆ. ಅದನ್ನು ಕೇಳಿ ಒಬ್ಬ ಶಿಕ್ಷಕರು, ಭಾಷೆಯನ್ನು ಕಲಿಯಲು ಮಕ್ಕಳೊಂದಿಗೆ ಮಾತನಾಡುವ ಮತ್ತು ಆಲಿಸುವ ಚಟುವಟಿಕೆಗಳನ್ನು ಮಾಡುವುದು ಬಹಳ ಮುಖ್ಯ ಎಂದರು. ತರಬೇತಿದಾರರು ಅದನ್ನು ಒಪ್ಪಿದರು ಮತ್ತು ಹೇಗೆ ತರಗತಿಕೋಣೆಯಲ್ಲಿ ಮಕ್ಕಳೊಂದಿಗೆ ಶಿಕ್ಷಕರು ಇಂಗ್ಲಿಷಿನಲ್ಲಿ ಸರಳ ವಾಕ್ಯಗಳನ್ನು ಮಾತನಾಡುವ ಪ್ರಯತ್ನಗಳನ್ನು ಮಾಡಬಹುದು, ಅದು ಮಕ್ಕಳಿಗೆ ಓದುವುದನ್ನು ಕಲಿಸಲು ಸಹಾಯ ಮಾಡುತ್ತದೆ ಎಂದು ಚರ್ಚಿಸಿದರು. ಇಲ್ಲಿ ಮತ್ತೆ ಶಿಕ್ಷಕರು ಗುಂಪು ಚಟುವಟಿಕೆಗಳಲ್ಲಿ ಯಾವ ಆಸಕ್ತಿಯನ್ನೂ ತೋರಿಸಲಿಲ್ಲ. ಪಠ್ಯಪುಸ್ತಕಗಳಿಂದ ಸುಮ್ಮನೆ ಕೆಲವು ಸಂಗತಿಗಳನ್ನು ನಕಲು ಮಾಡಿ ಚಾರ್ಟ್‌ಗಳನ್ನು ತಯಾರಿಸಿದರು. ಅಲ್ಲಿ ಯಾವುದೇ ಗಂಭೀರ ಚರ್ಚೆ ನಡೆಯಲಿಲ್ಲ ಅಥವಾ ಪ್ರಸ್ತುತಿಯಾಗಲಿಲ್ಲ.

ಇಲ್ಲಿ CCE ಯ ದಿನಚರಿ ಪುಸ್ತಕ ತುಂಬುವಾಗ ಮತ್ತೆ ಮೊದಲಾದಂತೆ ಆಯಿತು. ಇಂಗ್ಲಿಷಿಗೆ ಸಂಬಂಧಿಸಿದ ಬೇರೆ ಬೇರೆ ಹಂತದ ಗುಂಪುಗಳ ಪಾಠ ಯೋಜನೆಗಳನ್ನು ಶಿಕ್ಷಕರು ಅರ್ಥ ಮಾಡಿಕೊಳ್ಳಲಾಗಲಿಲ್ಲ. ಹೀಗಾಗಿ ಅವರು ಒಬ್ಬ ಶಿಕ್ಷಕರು ಆಗಲೇ ತುಂಬಿದ್ದ ದಿನಚರಿ ಪುಸ್ತಕವನ್ನು ಸುಮ್ಮನೇ ಜೆರಾಕ್ಸ್ ಮಾಡಿಸಿಕೊಂಡರು.

ಈ ರೀತಿಯಾಗಿ ಶಿಕ್ಷಕರು ಇದನ್ನು ಬೇಗ ಮುಗಿಸಿ ತಾವು ಶಾಲೆಗೆ ಮರಳಿ ತಮ್ಮ ಕೆಲಸವನ್ನು ಸುಲಭ ಮಾಡಿಕೊಳ್ಳುವ ಹಾದಿಗಳನ್ನು ಅರಸತೊಡಗಿದ್ದರು.

ಕೊನೆಯಲ್ಲಿ ನಿಮ್ಮ ಸಲಹೆಗಳೇನಾದರೂ ಇದ್ದರೆ ಕೊಡಿ ಎಂದು ಶಿಕ್ಷಕರನ್ನು ಕೇಳಿದಾಗ, ಸಲಹೆಗಳನ್ನು ನೀಡುವುದರಲ್ಲಿ ಅರ್ಥವಿಲ್ಲ, ಏಕೆಂದರೆ ತಮ್ಮ ಸಲಹೆಗಳಿಗೆ ಯಾರೂ ಗಮನ ಕೊಡುವುದಿಲ್ಲ ಮತ್ತು ತರಬೇತಿ ಕಾರ್ಯಕ್ರಮವನ್ನು ನಿರ್ವಹಿಸುವ ರೀತಿಯಲ್ಲಿಯೂ ಸುಧಾರಣೆ ಕಂಡುಬರುವುದಿಲ್ಲ ಎಂದು ಅವರು ಹೇಳಿದರು. ಕಳೆದ ಕೆಲ ವರ್ಷಗಳಿಂದ ತಾವು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಲೇ ಇದ್ದೇವೆ, ಸುಮ್ಮನೆ ಆರು ದಿನಗಳನ್ನು ವ್ಯಯಿಸುತ್ತಿದ್ದೇವೆ ಎಂದರು. ತಮ್ಮ ಬೋಧನೆಯಲ್ಲಿಯೂ ಸುಧಾರಣೆ ಇಲ್ಲ. ಹೀಗೆ ಒಬ್ಬರನ್ನೊಬ್ಬರು ದೂಷಿಸುವುದರೊಂದಿಗೆ ತರಬೇತಿ ಮುಕ್ತಾಯಗೊಂಡಿತು.

ನಾನು ಶಾಲೆಗೆ ಮರಳಿದ ನಂತರ ಈ ತರಬೇತಿಯನ್ನು ಕುರಿತು ನಮ್ಮ ವಿಜ್ಞಾನ ಶಿಕ್ಷಕರ (2ನೇ ತರಗತಿ) ಅನುಭವ ಹೇಗಿತ್ತು ಎಂದು ಕೇಳಿದೆ. ಚೆನ್ನಾಗಿತ್ತು ಎಂದು ಅವರು ಹೇಳಿದರು. ತರಗತಿ ಕೋಣೆಯಲ್ಲಿ ಕಲಿಸುತ್ತಿರುವಾಗ ಮಕ್ಕಳು ಇನ್ನೂ ಹೆಚ್ಚಿನ ತೀವ್ರತೆಯಿಂದ ಪಾಲ್ಗೊಳ್ಳುವಂತೆ ಹೇಗೆ ಮಾಡಬಹುದು ಎಂಬುದನ್ನು ಕಲಿತೆವು, ಅದು ಬಹಳ ಪ್ರಯೋಜನಕ್ಕೆ ಬಂತು ಎಂದು ಅವರು ಹೇಳಿದರು. ತರಬೇತಿ ಎಲ್ಲಿ ನಡೆಯಿತು ಎಂದು ಕೇಳಿದೆ, ಅದು ವಿದ್ಯಾಭವನದಲ್ಲಿ ನಡೆಯಿತು ಎಂದರು. ಕೆಲವು ತರಬೇತಿದಾರರು ಸರಕಾರೀ ತರಬೇತಿದಾರರಾಗಿದ್ದರು, ಇನ್ನು ಕೆಲವರು ವಿದ್ಯಾಭವನದಿಂದ ಬಂದಿದ್ದರು. ಅಲ್ಲಿ ಸರಕಾರ ಮತ್ತು ಖಾಸಗಿ ಸಂಸ್ಥೆಗಳ ಜಂಟಿ ನಿರ್ವಹಣೆ ಇತ್ತು. ವಿದ್ಯಾಭವನದಿಂದ ಬಂದಿದ್ದ ತರಬೇತಿದಾರರು ತಮಗೆ ಪ್ರಾತ್ಯಕ್ಷಿಕೆಯನ್ನು ನೀಡಲು ಪಠ್ಯಪುಸ್ತಕದ ಒಂದು ಪಾಠವನ್ನೂ ಮಾಡಿದರು ಎಂದು ಆಕೆ ಹೇಳಿದರು.

ಸರಕಾರೇತರ ಶೈಕ್ಷಣಿಕ ಸಂಸ್ಥೆಗಳಿಂದ ನಿರ್ವಹಿಸಲ್ಪಡುವ ತರಬೇತಿ ಕಾರ್ಯಕ್ರಮಗಳಲ್ಲಿ ತರಬೇತಿ ಹೇಗೆ ನಡೆಯುತ್ತದೆ ಮತ್ತು ಅಲ್ಲಿ ನಡೆಯುವ ಕೆಲವು ಮುಖ್ಯ ಸಂಗತಿಗಳನ್ನು ಎತ್ತಿ ಹೇಳಲು ಬಯಸುತ್ತೇನೆ. ಈ ಸಂಸ್ಥೆಗಳ ತರಬೇತಿದಾರರು ತರಬೇತಿಗೆ ಬರುವ ಮೊದಲೇ ಚೆನ್ನಾಗಿ ತಯಾರಿ ನಡೆಸಿಕೊಂಡಿರುತ್ತಾರೆ. ಎಷ್ಟು ಸೆಷನ್ ಇರಬೇಕು, ಯಾವ ಸಮಸ್ಯೆಗಳನ್ನು ಚರ್ಚೆಗೆ ಎತ್ತಿಕೊಳ್ಳಬೇಕು ಎನ್ನುವುದರ ಒಂದು ಸಂಪೂರ್ಣ ಯೋಜನೆಯನ್ನು ಮಾಡಿಕೊಳ್ಳುತ್ತಾರೆ. ತರಬೇತಿಯ ಉದ್ದಕ್ಕೂ ಎಲ್ಲಾ ಅವಧಿಗಳಲ್ಲಿಯೂ ಮುಕ್ತ ಚರ್ಚೆಗೆ ಅವಕಾಶವಿರುತ್ತದೆ. ಅಲ್ಲಿ ಶಿಕ್ಷಕರು ತಮ್ಮ ಸಮಸ್ಯೆಗಳು, ಅನುಭವಗಳು, ಮತ್ತು ಅಭಿಪ್ರಾಯಗಳನ್ನು ಹಂಚಿಕೊಳ್ಳುತ್ತಾರೆ. ಗುಂಪು ಚಟುವಟಿಕೆಗಳನ್ನು ಶ್ರದ್ಧೆಯಿಂದ ಮಾಡಲಾಗುತ್ತದೆ, ಪ್ರಸ್ತುತಿ ಪಡಿಸಲಾಗುತ್ತದೆ ಮತ್ತು ಎಲ್ಲಾ ಗುಂಪುಗಳೂ ತಮ್ಮ ವಿಚಾರಗಳನ್ನು ಹಂಚಿಕೊಳ್ಳುತ್ತವೆ. ಅದರ ಜೊತೆಗೆ ಶಿಕ್ಷಣವನ್ನು ಕುರಿತು ಒಳ್ಳೆಯ ಲೇಖಕರು ಬರೆದ ಲೇಖನಗಳನ್ನು ಶಿಕ್ಷಕರಿಗೆ ಕೊಡಲಾಗುತ್ತದೆ, ಇದರಿಂದ ಶಿಕ್ಷಕರು ಬೋಧನಾಕ್ರಮದ ವಿವಿಧ ಆಯಾಮಗಳನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ. ಬೇಸಿಗೆಯ ರಜಾ ದಿನಗಳಲ್ಲಿ ಈತರಬೇತಿ ಇಟ್ಟದ್ದಕ್ಕೆ ಮೊದಲು ಬೇಸರ ಪಟ್ಟುಕೊಂಡಿದ್ದ ಶಿಕ್ಷಕರು ತರಬೇತಿಯ ನಂತರ ಪಾಲ್ಗೊಂಡದ್ದು ಒಳ್ಳೆಯದಾಯಿತು, ತಮಗೆ ಪ್ರಯೋಜನವಾಯಿತು, ಸಮಯ ವ್ಯರ್ಥ ಎನಿಸಲಿಲ್ಲ ಎಂದರು. ತರಬೇತಿಯು ಫಲಪ್ರದವಾಯಿತು ಎಂದು ಅವರಿಗೆ ಅನ್ನಿಸಿತು.

ನನ್ನ ಗ್ರಹಿಕೆಯಲ್ಲಿ ಸರಕಾರದಿಂದ (SSA) ಕೊಡಲಾಗುವ ತರಬೇತಿಗೂ ಖಾಸಗಿ ಸಂಸ್ಥೆಯಿಂದ ನೀಡಲಾಗುವ ತರಬೇತಿಗೂ ಇರುವ ವ್ಯತ್ಯಾಸವೇನೆಂದರೆ, ಖಾಸಗಿ ಸಂಸ್ಥೆಗಳ ತರಬೇತಿದಾರರು ಹೆಚ್ಚು ಗಂಭೀರವಾಗಿರುತ್ತಾರೆ, ಶಿಕ್ಷಕರ ಸಮಸ್ಯೆಗಳನ್ನು ಆಲಿಸುತ್ತಾರೆ ಮತ್ತು ಪೂರ್ಣ ತಯಾರಿಯೊಂದಿಗೆ ಬರುತ್ತಾರೆ.

ಸರಕಾರದ ತರಬೇತಿದಾರರೂ ಸಹ ತಮ್ಮ ಕೆಲಸಗಳನ್ನು ಹೆಚ್ಚು ಗಂಭೀರವಾಗಿ ಯಾಕೆ ಪರಿಗಣಿಸಬಾರದು? ಯಾಕೆ ಹೆಚ್ಚಿನ ಪೂರ್ವ ತಯಾರಿಯೊಂದಿಗೆ ಬರಬಾರದು?

ಹಿಂದಿಯಿಂದ ಇಂಗ್ಲಿಷಿಗೆ ಅನುವಾದ: ನಲಿನಿ ರಾವಲ್.

ಲೇಖಕಿಯ ಸಂಪರ್ಕಕ್ಕೆ: shehnazakir@gmail.com

● ಅನುವಾದಕರು: **ಪ್ರಜ್ಞಾ ಎಲ್ ಎಸ್** | ಪರಿಶೀಲಕರು: **ನಾಗಮಣಿ ಎಸ್ ಎನ್**